ಜಿ. ಕೆ. ದೇವರಾಜಸ್ವಾಮಿ *

# ಮೇಳಿಗೆ ಮತ್ತು ಬುಕ್ಕಾಪುರದ ಶಿಲಾಯುಗದ ನಿವೇಶನಗಳು ಒಂದು ಶೋಧ

ಈಗಿನ ಶಿವಮೊಗ್ಗಾದಿಂದ ೬೦ ಕಿ.ಮೀ. ದೂರದಲ್ಲಿರುವ, ಪೂರ್ಣ ಮಲೆನಾಡು ತಾಲ್ಲೂಕುಗಳಲ್ಲಿ ಒಂದಾದ ತೀರ್ಥಹಳ್ಳಿ, ನದಿ, ಶಿಖರ, ಹಚ್ಚಹಸಿರಿನ ಕಾಡಿನಿಂದ ಕೂಡಿ ಪ್ರಕೃತಿ ಸೌಂದರ್ಯದ ಬೀಡಾಗಿಯೂ, ಇತಿಹಾಸ, ಪುರಾಣ ಪ್ರಸಿದ್ಧ ತೀರ್ಥಕ್ಷೇತ್ರವೂ ಆಗಿದೆ. ಪ್ರಸ್ತುತ ಲೇಖನದಲ್ಲಿ ತೀರ್ಥಹಳ್ಳಿ ತಾಲ್ಲೂಕಿನ ಪ್ರಾಗಿತಿಹಾಸಕ್ಕೆ ಸಂಬಂಧಿಸಿದ ಹಾಗೂ ನನ್ನ ಕ್ಷೇತ್ರ ಕಾರ್ಯದಲ್ಲಿ, ತೀರ್ಥಹಳ್ಳಿ ತಾಲ್ಲೂಕಿನ ಮೇಳಿಗೆ ಹಾಗೂ ಬುಕ್ಕಾಪುರದಲ್ಲಿ ಪತ್ತೆ ಹಚ್ಚಿದ ಶಿಲಾಯುಗದ ಎರಡು ನೆಲೆಗಳ ಬಗ್ಗೆ ತಿಳಿಸಲು ಇಚ್ಛಿಸುತ್ತೇನೆ. ಒಂದು ನವಶಿಲಾಯುಗಕ್ಕೆ ಸೇರಿದ್ದು ಮತ್ತೊಂದು ಬೃಹತ್ ಶಿಲಾಯುಗಕ್ಕೆ ಸೇರಿದುದಾಗಿದೆ.

## ನವಶಿಲಾಯುಗದ ನೆಲೆ

ಪ್ರಸ್ತುತ ತೀರ್ಥಹಳ್ಳಿ ತಾಲ್ಲೂಕು, ಮುತ್ತೂರು ಹೋಬಳಿ ಮೇಳಿಗೆ ಗ್ರಾಮದ ತಳುವೆ ಗುಡ್ಡದ ತಪ್ಪಲಿನಲ್ಲಿ ನವಶಿಲಾಯುಗಕ್ಕೆ ಸೇರಿದ ನಾಲ್ಕು ಕಲ್ಲಿನ ಕೊಡಲಿಗಳು ದೊರೆತಿವೆ. ಕೊಡಲಿಗಳು ತೀರಾ ಗಡುಸಾದ ಡಾಲರೈಟ್ ಕಲ್ಲಿನಿಂದ ಮಾಡಿದವುಗಳಾಗಿದ್ದು, ಅವುಗಳಲ್ಲಿ ಮೂರು ಕೊಡಲಿಗಳು ಅರ್ಧಕ್ಕೆ ಸರಿಯಾಗಿ ತುಂಡಾಗಿವೆ. ಎರಡು ಕೊಡಲಿಯ ಮುಂಭಾಗ ಒಂದು ಕೊಡಲಿಯ ಹಿಂಭಾಗ ದೊರೆತಿದೆ. ಎರಡೂ ಕೊಡಲಿಗಳು ಚೆನ್ನಾಗಿ ಉಜ್ಜಿ ಮಾಡಲ್ಪಟ್ಟಿದ್ದು ತೀರಾ ಹರಿತವಾಗಿದೆ.

ಸಂಪೂರ್ಣ (ಇಡಿಯಾಗಿರುವ) ವಾಗಿರುವ ಕೊಡಲಿಯು ೧೬ ಸೆಂ.ಮೀ. ಉದ್ದ ಹಾಗೂ ೭.೫ ಸೆಂ.ಮೀ. ಅಗಲವಾಗಿದೆ. ಮುಂಭಾಗವು ಅಗಲವಾಗಿದ್ದು, ಹಿಂಭಾಗದಲ್ಲಿ ಮುಂಭಾಗಕ್ಕಿಂತ ಸಣ್ಣದಾಗಿದ್ದು ಮರದ ಕಾವಿಗೆ ಸಿಕ್ಕಿಸಲು ಅನುಕೂಲವಾಗುವಂತಹ ಆಕಾರದಲ್ಲಿದೆ.

ಎರಡನೆಯ ಕೊಡಲಿಯ ೬.೦ ಸೆಂ.ಮೀ. ಅಗಲ ಹಾಗೂ ೭.೪ ಸೆಂ.ಮೀ. ಉದ್ದವಾಗಿದ್ದು ಇದರ ಹಿಂಭಾಗವೂ ಮುರಿದುಹೋಗಿದೆ. ಇದನ್ನು ಗಮನಿಸಿದರೆ ಈ ಕೊಡಲಿಯು ಹಲವಾರು ಬೇಟೆಯ ಪ್ರಸಂಗಗಳಲ್ಲಿ ಬಳಕೆಯಾಗಿದ್ದಿರಬಹುದೆನಿಸುತ್ತದೆ.



ನಿಲುವುಗಲ್ಲು, ಬುಕ್ಕಾಪುರ (ತೀರ್ಥಹಳ್ಳಿ, ತಾ||)

* ನಂ. ೩೯೩೬, ೨ನೇ ಹಂತ, 'ಬಿ' ಬ್ಲಾಕ್, ೨ನೇ ಅಡ್ಡರಸ್ತೆ, ಗಾಯತ್ರಿನಗರ, ಬೆಂಗಳೂರು-೫೬೦ ೦೨೧.

ಮೂರನೆಯ ಕೊಡಲಿಯ, ೫.೫ ಸೆಂ.ಮೀ. ಅಗಲ ಹಾಗೂ ೭.೦ ಸೆಂ.ಮೀ. ಉದ್ದವಾಗಿದ್ದು ಇದರ ಹಿಂಭಾಗವೂ ತುಂಡಾಗಿದೆ. ಈ ಕೊಡಲಿಯೂ ಹೆಚ್ಚಾಗಿ ಬಳಕೆಯಾಗಿರುವಂತೆ ಕಂಡುಬರುತ್ತದೆ.

ನಾಲ್ಕನೆಯ ಕೊಡಲಿಯು ಒಂದು ಕೊಡಲಿಯ ಹಿಂಭಾಗ ಮಾತ್ರವಾಗಿದ್ದು, ಮುಂಭಾಗ ಮುರಿದು ಹೋಗಿದ್ದು ಅದು ಉಪಲಬ್ಧವಾಗಿಲ್ಲ. ಈ ತುಂಡು ಮೊದಲು ಹೇಳಿದ ಎರಡು ಕೊಡಲಿಗಳಲ್ಲಿ ಯಾವುದಕ್ಕೂ ಸೇರದ ಬೇರೊಂದು ಕೊಡಲಿಯ ಭಾಗವಾಗಿದೆ. ಇದು ೮.೦ ಸೆಂ.ಮೀ. ಉದ್ದ, ೫.೫ ಸೆಂ.ಮೀ. ಅಗಲವಾಗಿದೆ.



ಕೊಡಲಿ ಮೇಳಿಗ, ತೀರ್ಥಹಳ್ಳಿ

ಶಿಲಾಯುಧಗಳು ದೊರೆತ ಸ್ಥಳದ ಸುತ್ತಮುತ್ತಲಿನ ಪ್ರದೇಶವನ್ನೆಲ್ಲಾ ಸೂಕ್ಷ್ಮವಾಗಿ ಪರಿಶೀಲಿಸಿದರೂ ಸಹ ನವಶಿಲಾಯುಗಕ್ಕೆ ಸೇರಿದ ಮತ್ತಾವುದೇ ಅವಶೇಷಗಳು ದೊರೆಯಲಿಲ್ಲ. ನವಶಿಲಾಯುಗದ ಜನರ ನೆಲೆಗಳ ಸನಿಹದಲ್ಲಿ ಬೃಹದಾಕಾರದ ಬೂದಿಯ ಗುಡ್ಡೆಗಳು ದೊರೆಯುವುದು ಸಾಮಾನ್ಯ ಸಂಗತಿ. ಆದರೆ ಪ್ರಸ್ತುತ ನಿವೇಶನದಲ್ಲಿ ಯಾವುದೇ ಬೂದಿಯ ಗುಡ್ಡೆಗಳೂ ಸಹ ದೊರೆಯದಿರುವುದು ಆಶ್ಚರ್ಯದ ಸಂಗತಿ. ಈ ಪ್ರದೇಶದಲ್ಲಿ



ಕೊಡಲಿಗಳು ಮೇಳಿಗ, ತೀರ್ಥಹಳ್ಳಿ ತಾ||

ಆಯುಧಗಳು ದೊರೆತ ಸ್ಥಳದಲ್ಲಿ ಈಗಲೂ ಅರಣ್ಯವಿದೆ. ಇಲ್ಲಿ ಕಾಡುಹಂದಿ, ಹುಲಿ, ಕಾಡುಕುರಿ ಮುಂತಾದ ಪ್ರಾಣಿಗಳಿವೆ. ಇಲ್ಲಿಂದ ಒಂದು ಫರ್ಲಾಂಗ್ ದೂರದಲ್ಲಿ ಸಣ್ಣ ನದಿಯೊಂದು ಹರಿಯುತ್ತದೆ. ಬಹುಶಃ ನವಶಿಲಾಯುಗದ ಜನರು ಇಲ್ಲಿ ವಿಪುಲವಾಗಿ ದೊರೆಯುತ್ತಿದ್ದ ಪ್ರಾಣಿಗಳನ್ನು ಬೇಟೆಯಾಡಿ ಆಹಾರಕ್ಕೋಸ್ಕರ ಬಳಸುತ್ತಿದ್ದರೆಂದು ಊಹಿಸಬಹುದು.

**ಬೃಹತ್ ಶಿಲಾಯುಗದ ನೆಲೆ**

ನವಶಿಲಾ-ತಾಮ್ರ ಶಿಲಾಯುಗಗಳ ನಂತರದ ಕಾಲದಲ್ಲಿ ಕಬ್ಬಿಣದ ಆವಿಷ್ಕಾರವಾಗಿ ಕಬ್ಬಿಣದ ಆಯುಧಗಳು ಬಳಕೆಗೆ ಬಂದು ಕಲ್ಲಿನ ಆಯುಧಗಳ ಬಳಕೆ ನಿಂತಿತು. ಇದು ಬೃಹತ್ ಶಿಲಾಯುಗವಾಗಿದ್ದು ಈ ಯುಗವನ್ನು ಕಬ್ಬಿಣಯುಗವೆಂದೂ ಕರೆಯಲಾಗಿದೆ.

ಬೃಹತ್ ಶಿಲಾ ಸಮಾಧಿಗಳನ್ನು ಕಟ್ಟಲು ಕಲ್ಲೇ ಪ್ರಧಾನವಾಗಿದ್ದರಿಂದ ಈ ಎಲ್ಲಾ ಸೌಕರ್ಯವಿರುವ ಬೆಟ್ಟ ಗುಡ್ಡಗಳ ಬದಿಯ ಪ್ರದೇಶವನ್ನು ಈ ಯುಗದ ಜನರು ಆರಿಸಿಕೊಳ್ಳುತ್ತಿದ್ದರು. ಕೃಷಿ ಉಪಕರಣಗಳು ಹಾಗೂ ಆಯುಧಗಳನ್ನು ಕಬ್ಬಿಣದಿಂದ ಮಾಡಿ ಬಳಸುತ್ತಿದ್ದರು. ನಿಸರ್ಗದತ್ತವಾದ ಕಬ್ಬಿಣದ ಅದಿರನ್ನು ಕರಗಿಸಿ ಆಯುಧಗಳನ್ನು ಮಾಡಿಕೊಳ್ಳುವ ತಾಂತ್ರಿಕತೆ ಇವರಲ್ಲಿತ್ತು ಎಂಬುದಕ್ಕೆ ಬೇರೆ ಬೇರೆ ಕಡೆ ನಿವೇಶನಗಳಲ್ಲಿ ದೊರೆತ ಕಬ್ಬಿಣ ವಸ್ತುಗಳೇ ಸಾಕ್ಷಿಯಾಗಿವೆ.

ಇವರ ಸಮಾಧಿಗಳುಳ್ಳ ಹಲವಾರು ನಿವೇಶನಗಳು ದೊರೆತಿದ್ದರೂ ಸಹ ಇವರ 'ನಿವಾಸ'ಗಳುಳ್ಳ ನಿವೇಶನಗಳು ಬೆರಳೆಣಿಕೆಯಷ್ಟು ಮಾತ್ರ ದೊರಕಿವೆ. ಅವರ ವಾಸದ ಮನೆಗಳು ಸರಳವಾಗಿದ್ದು, ಮಣ್ಣು ಮೆತ್ತಿದ, ಹಣೆದ ದಬ್ಬೆ ಗೋಡೆ, ಹುಲ್ಲುಕಡ್ಡಿ ಮಾಡು, ಬೇಗ ನಶಿಸಿ ಹೋಗುವಂತಹ ವಸ್ತುಗಳಿಂದ ಕಟ್ಟಲಾಗಿತ್ತೆಂದು ಭಾವಿಸಲಾಗಿದೆ.

ಬೃಹತ್ ಶಿಲಾಯುಗದ ನಿವೇಶನಗಳಲ್ಲಿ ನಮಗೆ ಪ್ರಮುಖವಾಗಿ ದೊರೆಯುವ ಅವಶೇಷಗಳೆಂದರೆ ಅವರ ಸಮಾಧಿಗಳು. ಬೃಹತ್ ಶಿಲಾಯುಗದ ಜನರ ಸಮಾಧಿಗಳ ಹೆಗ್ಗುರುತು ಎಂದರೆ, ಇವರ ಸಮಾಧಿಗಳ ಸುತ್ತಲೂ ಕಲ್ಲುಗಳಿಂದ ಒಂದು ಅಥವಾ ೨-೩ ವೃತ್ತಗಳಿರುತ್ತವೆ. ಈ ವೃತ್ತಗಳನ್ನು ಚಪ್ಪಡಿ ಚೂರು, ಅಥವಾ ಕಾಡುಗಲ್ಲು (ಉರುಟುಗಲ್ಲು) ಸಿಕ್ಕಿದ್ದನ್ನು ಇದ್ದಂತೆಯೇ ತಂದು ನಿರ್ಮಿಸಿದ್ದಾಗಿರಬಹುದು.

ತೀರ್ಥಹಳ್ಳಿ ತಾಲ್ಲೂಕು ಕಸಬಾ ಹೋಬಳಿಯ ಬುಕ್ಲಾಪುರ ಗ್ರಾಮದ ಹೊರಬೈಲು ಗುಡ್ಡದ ತಪ್ಪಲಿನಲ್ಲಿ ಬೃಹತ್ ಶಿಲಾಯುಗಕ್ಕೆ ಸೇರಿದ ಒಂದು ನಿವೇಶನ ಪತ್ತೆ ಹಚ್ಚಿದ್ದೇನೆ. ಇಲ್ಲಿ ಶಿಲಾ ವೃತ್ತಗಳುಳ್ಳ ೧೫ ಸಮಾಧಿಗಳು ಮತ್ತು ಒಂದು ನಿಲವುಗಲ್ಲು (ಮೆನ್‌ಹಿರ್) ಇದೆ.

ಈ ಸಮಾಧಿಗಳು ಶಿಲಾವೃತ್ತಗಳಿಂದ ಕೂಡಿದ ಕಣಶಿಲೆಯ ಕೋಣೆ ಗೋರಿಗಳಾಗಿವೆ. ಕಣಶಿಲೆಯ ಚಪ್ಪಡಿಗಳನ್ನು ಸ್ವಸ್ತಿಕಾಕಾರದಲ್ಲಿ ಕೋಣೆಯಂತೆ ನಿರ್ಮಿಸಿ, ಕೆಳಗೆ ಮತ್ತು ಮೇಲ್ಭಾಗದಲ್ಲಿ ದೊಡ್ಡ ಚಪ್ಪಡಿಯಿಂದ ಮುಚ್ಚಿ ಈ ಗೋರಿಗಳನ್ನು ನಿರ್ಮಿಸಲಾಗಿದೆ. ಸುತ್ತಲೂ ಮಣ್ಣು ಮುಚ್ಚಿಕೊಂಡಿರುವುದರಿಂದ ಇವುಗಳಲ್ಲಿರುವ ರಂಧ್ರ ಅಥವಾ ಹಾದಿಯು ಕಂಡುಬರುವುದಿಲ್ಲ.

ಈ ಗೋರಿಗಳಲ್ಲಿ ಕೆಲವುಗಳ ಸುತ್ತಲೂ ಉರುಟು (ಕಾಡುಗಲ್ಲು) ಕಲ್ಲುಗಳಿಂದ ನಿರ್ಮಿಸಿದ ಶಿಲಾವೃತ್ತಗಳಿದ್ದು ಈ ವೃತ್ತಗಳು ೧೫ ಅಡಿಗಳಿಂದ ೨೦ ಅಡಿಗಳಷ್ಟು ವಿಸ್ತಾರವಾಗಿವೆ. ಎಲ್ಲಾ ಗೋರಿಗಳ ಮೇಲ್ಭಾಗದಲ್ಲಿಯೂ ಮುಚ್ಚಳದ ಕಲ್ಲುಗಳು ಇವೆ. ಇವುಗಳಲ್ಲಿ ಸುಮಾರು ೧೦ ಗೋರಿಗಳು ಸಂಪೂರ್ಣವಾಗಿ ಹಾಳಾಗಿದ್ದು ಕೋಣೆಯಾಕಾರದ ಚಪ್ಪಡಿಗಳು ಹಾಗೂ ಶಿಲಾವೃತ್ತಗಳು ಮಾತ್ರ ಉಳಿದಿವೆ. ಉಳಿದವುಗಳು ಯಾವುದೇ ರೀತಿಯ ಹಾನಿಗೊಳಗಾಗದಂತೆ ಇವೆ.




ಕೊಡಲಿಗಳು,ಮೇಳಿಗ, ತೀರ್ಥಹಳ್ಳಿ ತಾ||

ಈ ಪ್ರದೇಶದಲ್ಲಿ ಸರ್ಕಾರದ ತೋಟಗಾರಿಕಾ ಇಲಾಖೆಯವರ ಫಾರ್ಮ್ ಇದೆ. ಅವರು ತೆಂಗು ಮತ್ತು ಹಣ್ಣಿನ ಗಿಡಗಳನ್ನು ನೆಡುವುದಕ್ಕೋಸ್ಕರ ಹಲವಾರು ಸಮಾಧಿಗಳನ್ನು ಅಗೆದು ಹಾಳು ಮಾಡಿದ್ದಾರೆ. ಈ ಸಮಾಧಿಗಳ ಬಳಿಯಲ್ಲಿಯೇ ೧೦ ಅಡಿ ಎತ್ತರ, ೪ ಅಡಿ ೪ ಅಂಗುಲ ಅಗಲದ ಒಂದು ನಿಲವುಗಲ್ಲು ಇದೆ. ಕಪ್ಪು ಕಣಶಿಲೆಯ ಈ ನಿಲವುಗಲ್ಲು ಕೆಳಭಾಗದಲ್ಲಿ ಅಗಲವಾಗಿದ್ದು ಮೇಲ್ಭಾಗದಲ್ಲಿ ಕಿರಿದಾಗಿದೆ. ಬೃಹತ್ ಶಿಲಾಯುಗದ ಜನರು ತಮ್ಮ ಜನರ ಸಮಾಧಿಗಳ ಬಳಿಯಲ್ಲಿ ಈ ರೀತಿಯ ನಿಲವುಗಲ್ಲುಗಳನ್ನು ನಿಲ್ಲಿಸುತ್ತಿದ್ದ ಸಂಗತಿ ತಿಳಿದಿದೆ. ಈ ನಿವೇಶನದ ಬಳಿಯಲ್ಲಿಯೇ ಸುಮಾರು ೧೦೦ ಅಡಿ ದೂರದಲ್ಲಿ ತುಂಗಾನದಿಯು ಹರಿಯುತ್ತದೆ.

ಈ ಪ್ರದೇಶದಲ್ಲಿ ದೊರೆತಿರುವ ನವಶಿಲಾಯುಗ ಹಾಗೂ ಬೃಹತ್ ಶಿಲಾಯುಗದ ಅವಶೇಷಗಳನ್ನು ಗಮನಿಸಿದರೆ ಅಂದಿನಿಂದಲೂ ಇಲ್ಲಿ ಜನರು ವಾಸಿಸುತ್ತಿದ್ದರೆಂದು ಹೇಳಬಹುದಾಗಿದೆ.

## ಗ್ರಂಥಋಣ

ಕರ್ನಾಟಕ ಕನ್ನಡ ವಿಷಯ ವಿಶ್ವಕೋಶ, ಮೈಸೂರು ವಿಶ್ವವಿದ್ಯಾಲಯ, ೧೯೭೯.

ಎಂ. ಜಿ. ಮಂಜುನಾಥ್., ಇತ್ತೀಚೆಗೆ ಪತ್ತೆಯಾದ ಬೃಹತ್ ಶಿಲಾಯುಗದ ನಿವೇಶನಗಳು : ಸಾಧನೆ, ಸಂಪುಟ ೨೩, ಸಂಚಿಕೆ ೧-೨, ಬೆಂಗಳೂರು, ವಿ.ವಿ. ೧೯೯೪.

(ಕ್ಷೇತ್ರಕಾರ್ಯ ಮತ್ತು ಲೇಖನ ಸಿದ್ಧಪಡಿಸಲು ಸಹಾಯ ಮಾಡಿದ ರಘುವೀರ ಹೆಗಡೆ, ಎಂ. ಎನ್. ಸುಬ್ರಮಣ್ಯ ಮತ್ತು ಎಂ. ಜಿ. ಮಂಜುನಾಥ್‌ರವರಿಗೆ ಕೃತಜ್ಞತೆಗಳು).